# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1022 |
| ಸದಸ್ಯರ ಹೆಸರು | ಶ್ರೀ ಹೆಚ್ ಎಂ ರಮೇಶ್ ಗೌಡ |
| ಉತ್ತರಿಸುವ ದಿನಾಂಕ | 22-12-2021 |
| ಉತ್ತರಿಸುವವರು | ಮುಜರಾಯಿ, ಹಜ್ ಹಾಗೂ ವಕ್ಫ್ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ದೇವಸ್ಥಾನಗಳನ್ನು ಹೊರತುಪಡಿಸಿ, ರಾಜ್ಯದಲ್ಲಿ ಮುಜರಾಯಿ ಇಲಾಖೆ ವ್ಯಾಪ್ತಿಗೆ ಒಳಪಡುವ ಆಸ್ತಿಗಳು ಯಾವುವು; (ಜಿಲ್ಲಾವಾರು ವಿವರವಾದ ಮಾಹಿತಿ ನೀಡುವುದು) | ಪ್ರಸ್ತುತ ರಾಜ್ಯದಲ್ಲಿರುವ ಮುಜರಾಯಿ ಇಲಾಖೆ ವ್ಯಾಪ್ತಿಗೊಳಪಟ್ಟ ಅಧಿಸೂಚಿತ ಸಂಸ್ಥೆಗಳಿಗೆ ಸೇರಿದ ಸ್ವತ್ತುಗಳನ್ನು ಆಯಾಯ ಸಂಸ್ಥೆಗಳ ಆರ್ಥಿಕ ಹಿತದೃಷ್ಟಿಯನ್ನು ಗಮನದಲ್ಲಿರಿಸಿಕೊಂಡು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮದಾಯ ದತ್ತಿಗಳ ಅಧಿನಿಯಮ 1997 ಮತ್ತು 2002ರ ನಿಯಮಗಳ ಅಡಿಯಲ್ಲಿ ಬಹಿರಂಗ ಹರಾಜು ಮೂಲಕ ಗುತ್ತಿಗೆಗೆ ವಹಿಸಲಾಗುತ್ತದೆ. ಅಧಿಸೂಚಿತ ದೇವಾಲಯಗಳಿಗೆ ಸೇರಿದ ಸ್ವತ್ತಿನ ಸ್ವಾಧೀನತೆ ಕುರಿತು ಅಳತೆ ಕಾರ್ಯ ಮತ್ತು ಗಡಿ ಗುರುತಿಸುವ ಕಾರ್ಯ ಪ್ರಗತಿಯಲ್ಲಿರುತ್ತದೆ.<br>ಮುಜರಾಯಿ ಧಾರ್ಮಿಕ ಸಂಸ್ಥೆಗಳು ಹೊಂದಿರುವ ವಿವರ ಮತ್ತು ಸದರಿ ಆಸ್ತಿಗಳನ್ನು ವ್ಯಕ್ತಿ/ಸಂಸ್ಥೆಗಳಿಗೆ ಗುತ್ತಿಗೆಗೆ ನೀಡಿರುವ ಬಗ್ಗೆ ಜಿಲ್ಲಾವಾರು ಮಾಹಿತಿಯು ಅಗಾಧ ಪ್ರಮಾಣದಲ್ಲಿದ್ದು, ಮಾನ್ಯ ಶಾಸಕರಿಗೆ ಪ್ರತ್ಯೇಕವಾಗಿ ಸಿಡಿ ರೂಪದಲ್ಲಿ ಒದಗಿಸಲಾಗುವುದು. |
| ಆ | ಸದರಿ ಆಸ್ತಿಗಳನ್ನು ಯಾವ ಯಾವ ಸಂಘ ಸಂಸ್ಥೆ, ವ್ಯಕ್ತಿ ಹಾಗೂ ಇತರೆ ಏಜೆನ್ಸಿಗಳಿಗೆ ಭೋಗ್ಯಕ್ಕೆ ನೀಡಲಾಗಿದೆಯೇ; (ಜಿಲ್ಲಾವಾರು ಮಾಹಿತಿ ನೀಡುವುದು) | |
| ಇ) | ಇವುಗಳಿಂದ ಸರ್ಕಾರಕ್ಕೆ ಬರುವ ಆದಾಯವೆಷ್ಟು; ಈ ಆದಾಯವನ್ನು ಹೆಚ್ಚಿಸಲು ಸರ್ಕಾರ ಯಾವ ಕ್ರಮಕೈಗೊಂಡಿದೆ? | ಮುಜರಾಯಿ ಧಾರ್ಮಿಕ ಸಂಸ್ಥೆಗಳಿಗೆ ಸೇರಿದ ಸ್ವತ್ತುಗಳನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮದಾಯ ದತ್ತಿಗಳ ಅಧಿನಿಯಮ 1997 ಮತ್ತು ನಿಯಮಗಳು 2002ರಡಿಯಲ್ಲಿ ಬಹಿರಂಗ ಹರಾಜಿನಲ್ಲಿ ವಹಿಸುವ ಮೂಲಕ ಬರುವ ಬಾಡಿಗೆ ಮತ್ತು ಗುಡ್ ವಿಲ್ ಮೊತ್ತವನ್ನು ಆಯಾಯ ದೇವಾಲಯದ ಉಳಿತಾಯ ಖಾತೆಗೆ ಜಮಾ ಮಾಡಲಾಗುತ್ತದೆ. ಕಾಯ್ದೆ ನಿಯಮಗಳಲ್ಲಿ ವಾರ್ಷಿಕ ಶೇಕಡ 10 ರಷ್ಟು ಬಾಡಿಗೆ ಹೆಚ್ಚಿಸಲು ಅವಕಾಶ ಕಲ್ಪಿಸಲಾಗಿದೆ.<br>ಧಾರ್ಮಿಕ ದತ್ತಿ ಇಲಾಖೆ ವ್ಯಾಪ್ತಿಗೆ ಸೇರಿದ ಸ್ವತ್ತುಗಳಿಂದ ಸರ್ಕಾರಕ್ಕೆ ಯಾವುದೇ ಆದಾಯ ಬರುವುದಿಲ್ಲ. |

ಸಂಖ್ಯೆ: ಕಂಇ 268 ಮುಸಪ್ರ 2021

(ಶಶಿಕಲಾ. ಅ. ಜೊಲ್ಲೆ)

ಮುಜರಾಯಿ, ಹಜ್ ಹಾಗೂ ವಕ್ಫ್ ಸಚಿವರು